





(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسۡمِ اللّٰهِ الرَّحۡمٰنِ الرَّحِيۡمِ

1. ಹೆಚ್ಚು ಹೆಚ್ಚಾಗಿ ಮತ್ತು ಇತರರಿಗಿಂತ ಅಧಿಕವಾಗಿ ಸಂಪಾದಿಸುವ ಚಿಂತೆಯು ನಿಮ್ಮನ್ನು ಅನಾಸ್ಥೆಗೆ ಒಳಪಡಿಸಿ ಬಿಟ್ಟಿದೆ-

اَلۡهٰكُمُ التَّكَاثُرُۙ ١

2. ಕೊನೆಗೆ (ಇದೇ ಚಿಂತೆಯಲ್ಲಿ) ನೀವು ಗೋರಿಯ ಅಂಚನ್ನು ತಲುಪುತ್ತೀರಿ.

حَتّٰى زُرۡتُمُ الۡمَقَابِرَؕ ٢

3. ಖಂಡಿತ ಅಲ್ಲ, ಸದ್ಯವೇ ನಿಮಗೆ ತಿಳಿಯಲಿದೆ.-[1]

كَلَّا سَوۡفَ تَعۡلَمُوۡنَۙ ٣

4. ಇನ್ನೂ (ಕೇಳಿರಿ) ಖಂಡಿತ ಅಲ್ಲ, ಸದ್ಯವೇ ನಿಮಗೆ ತಿಳಿಯಲಿದೆ.

ثُمَّ كَلَّا سَوۡفَ تَعۡلَمُوۡنَؕ ٤

5. ಖಂಡಿತ ಅಲ್ಲ, ನೀವು ಖಚಿತ ಜ್ಞಾನದ ಆಧಾರದಲ್ಲಿ (ಈ ಪ್ರವೃತ್ತಿಯ ಪರಿಣಾಮವನ್ನು) ತಿಳಿದಿರುತ್ತಿದ್ದರೆ! (ನಿಮ್ಮ ವರ್ತನೆ ಹೀಗಿರುತ್ತಿರಲಿಲ್ಲ.)

كَلَّا لَوۡ تَعۡلَمُوۡنَ عِلۡمَ الۡيَقِيۡنِؕ ٥

6. ನೀವು ನರಕವನ್ನು ಕಂಡೇ ತೀರುವಿರಿ-

لَتَرَوُنَّ الۡجَحِيۡمَۙ ٦

7. ಇನ್ನೂ (ಕೇಳಿರಿ) ನೀವು ಸಂಪೂರ್ಣ ಅರಿವಿನೊಂದಿಗೆ ಅದನ್ನು ನೋಡುವಿರಿ-

ثُمَّ لَتَرَوُنَّهَا عَيۡنَ الۡيَقِيۡنِۙ ٧

8. ಆ ಬಳಿಕ ಖಂಡಿತವಾಗಿಯೂ ಈ ಅನುಗ್ರಹಗಳ ಬಗ್ಗೆ ನೀವು ಪ್ರಶ್ನಿಸಲ್ಪಡುವಿರಿ.

ثُمَّ لَتُسۡـَٔلُنَّ يَوۡمَئِذٍ عَنِ النَّعِيۡمِ ٨ ع ٨ ٢٧

---

1. ಸದ್ಯವೇ ಎಂದರೆ ಪರಲೋಕವೂ ಆಗಿರಬಹುದು ಅಥವಾ ಮರಣವೂ ಆಗಿರಬಹುದು. ಏಕೆಂದರೆ ಯಾವ ಚಟುವಟಿಕೆಗಳಲ್ಲಿ ನಾನು ಜೀವನ ಕಳೆದೆನೋ ಅದು ನನ್ನ ಪಾಲಿಗೆ ಅನುಗ್ರಹ ಮತ್ತು ಸಂತಸ-ಸೌಭಾಗ್ಯ ತರುವ ಸಾಧನಗಳಾಗಿದ್ದುವೋ ಅಥವಾ ಕೆಟ್ಟ ಪರಿಣಾಮ ಮತ್ತು ನಿಂದ್ಯತೆಗೆ ಹೇತುವಾಗಿದ್ದುವೋ ಎಂಬುದು ಮರಣ ಹೊಂದಿದ ತಕ್ಷಣ ಮಾನವನ ಮುಂದೆ ಅನಾವರಣಗೊಳ್ಳುವುದು.